# ಕಾಗಿನೆಲೆ – ಇನ್ನೊಂದು ಮುಖ

ಡಾ॥ಸರೋಜಿನಿ ಚವಲಾರ್

ಕಾಗಿನೆಲ್ಲಿ ಅಥವಾ ಕಾಗಿನೆಲೆಯೆಂದ ಕೂಡಲೇ ಕನ್ನಡಿಗರಿಗೆ ಮನೆ ಮಾತಾಗಿರುವ ಕನಕದಾಸರ ನೆನ ಪಾಗುತ್ತದೆ. ಇದು ಒಂದು ಮುಖ. ಕನಕದಾಸರಿಗೆ ಹಿರಿಯನೆನಿಸಿದ ಸಂಗಮನಾಥನೆಂಬ ಮಹಾಪುರುಷ ನೊಬ್ಬನು ಕಾಗಿನೆಲೆಯ ಹೆಸರನ್ನು ಕನಕದಾಸರಿಗಿಂತ ಮೊದಲು ಬೆಳಗಿಸಿದ್ದನು. ಇದು ಇನ್ನೊಂದು ಮುಖ.

ಕಾಗಿನೆಲೆಯಲ್ಲಿ ಒಂದು ಸಾವಿರ ವರುಷದ ಹಿಂದೆ ಕಾಳಶೆಟ್ಟಿ ಎಂಬ ಪಾಳೆಯಗಾರನು ಕಟ್ಟಿಸಿದ್ದ ಕಾಳ ಹತ್ತೇಶ್ವರ !, ಬೆಟ್ಟೇಶ್ವರ ದೇವಾಲಯಗಳು ಇದ್ದ ವೆಂದು ಊರಿನಲ್ಲಿ ಕೋಟೆ ಅರಮನೆಗಳಿದ್ದವೆಂದು ತಿಳಿಯುತ್ತದೆ. ಬುಕ್ಕರಾಯನ ಸೊಸೆ ದೇವಸ್ಥಾನಕ್ಕೆ ದತ್ತಿ ಕೊಟ್ಟಿದ್ದಳೆಂದು ಕಟ್ಟಿ ಶೇಷಾಚಾರ್ಯರು ಕವಿ ಕನಕ ದಾಸರನ್ನು ಕುರಿತು ಬರೆದ ಕನಕ ಮಹಿಮಾ ದರ್ಶನದಲ್ಲಿ ಹೇಳಿದ್ದಾರೆ.

ಕಾಗಿನೆಲೆ ಸಂಗಮನಾಥನಂತ ಭಕ್ತ ಶರಣನನ್ನು ಕನಕದಾಸರಂಥ ಶರಣರನ್ನು ಆಕರ್ಷಿಸಿರುತ್ತದೆ. ಕನಕ ದಾಸರಿಗೆ ಸಂಗಮನಾಥನು ಗುರು ಆಗಿರಬೇಕು. ಕದರ ಮಂಡಲಗಿಯ ಹನುಮಂತ ದೇವರ ಸೇವೆ ಮಾಡಿ ಕೊಂಡಿದ್ದ ಕನಕರು ಕಾಗಿನೆಲೆಗೆ ಬರಲು ಸಂಗಮ ನಾಥರೇ ಕಾರಣರಾಗಿರಬೇಕು. ಕದರ ಮಂಡಲಗಿಯಲ್ಲಿ ಎದುರು ಮುಖದ ಹನುಮಂತ ದೇವರ ಗುಡಿ ಇದ್ದು ಅದೇ ಗುಡಿಯಲ್ಲಿ ಪೌಳಿಯಲ್ಲಿ ಒಂದು ಕಡೆಗೆ ಕನಕದಾಸ ರಿದ್ದರೆಂದು ಈಗಲೂ ಜನರು ತೋರಿಸುತ್ತಾರೆ.

ಸಂಗಮನಾಥರು ಕೊಡೆಕಲ್ ಬಸವಣ್ಣನ ಮಗ. ಕೊಡೆಕಲ್ ಗ್ರಾಮವು ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿಗೆ ಸೇರಿರುತ್ತದೆ. ಕೊಡೆಕಲ್ಲ ಬಸವಣ್ಣನವರ ಮೂವರು ಮಕ್ಕಳಲ್ಲಿ ವೀರಪ್ಪಯ್ಯ ಕೊಡೆಕಲ್‌ದ ಶೂನ್ಯಪೀಠಕ್ಕೆ ಅಧಿಪತಿಯಾಗಿದ್ದರು. ರಾಚಪ್ಪಯ್ಯ ಕಾವೇರಿ ನದಿಯ ದಂಡೆಯ ಮೇಲೆ ಮೈಸೂರ ಹತ್ತಿರದ ಊರಲ್ಲಿ ಐಕ್ಯರಾಗಿದ್ದಾರೆ. ಸಂಗಮನಾಥರು (ಸಂಗನ ಬಸವ ಸಂಗಮೇಶ್ವರ) ಹಾವೇರಿಯ ಹತ್ತಿರದ ಕಾಗಿನೆಲೆಗೆ ಬಂದು ವಾಸವಾಗಿದ್ದರು. ಕಾಗಿನೆಲೆಯಲ್ಲಿ ಸಂಗಮನಾಥ ಮುತ್ತ್ಯಾ(ಅಜ್ಜ) ಎಂದುಕರೆಯುತ್ತಾರೆ.

ಕೊಡೆಕಲ್‌ದಿಂದ ಎಲ್ಲ ಜಾತಿಯ ಭಕ್ತರು ಶಿವ ರಾತ್ರಿಯಲ್ಲಿ ನಡೆಯುವ ಸಂಗಮನಾಥನ ಜಾತ್ರೆಗೆ ಬರು ತ್ತಾರೆ. ಸಿಗ್ಲಿ ಯಲವಗಿಯ ಕುರುಬರು ವಿಶೇಷವಾಗಿ ಈ ಶರಣರಿಗೆ ನಡೆದುಕೊಳ್ಳುತ್ತಾರೆ. ಕೊಡೆಕಲ್‌ದಲ್ಲಿ ಬಸವಣ್ಣನ ಗದ್ದುಗೆ ಇದ್ದಂತೆ ಕಾಗಿನೆಲೆಯಲ್ಲಿ ಸಂಗಮ ನಾಥರ ಗದ್ದುಗೆ ಇದೆ. ಕೊಡೆಕಲ್‌ದಲ್ಲಿ ವರ್ಷಕ್ಕೆರಡು ಸಲ ಜಾತ್ರೆಯಾಗುತ್ತದೆ–ದಮನದ ಹುಣ್ಣಿಮೆ, ಗೌರಿ ಹುಣ್ಣಿಮೆ.

**ಜಾತ್ರೆ :** ಶಿವರಾತ್ರಿಗೆ ಕಾಗಿನೆಲೆಯಲ್ಲಿ ಸಂಗಮ ನಾಥರ ಜಾತ್ರೆಯಾಗುತ್ತದೆ. ತೇರು ಎಳೆಯುವ ಜಾತ್ರೆ ಯಲ್ಲಿ ಅಮವಾಸ್ಯೆಯ ದಿನ ಬೆಳಿಗ್ಗೆ ರುದ್ರಾಭಿಷೇಕ ಮಾಡಿ ಗದ್ದಿಗೆಗೆ ಗಂಧದ ಲೇಪನ ಮಾಡುತ್ತಾರೆ. ಇದಕ್ಕೆ ಗಂಧದ ಹೊದಿಕೆ ಹಾಕುವದು ಎನ್ನುತ್ತಾರೆ. ನಂತರ ಲೋಬಾನ ಹಾಕಿ ಬಾಗಿಲು ಮುಚ್ಚಿ ಹೊರಗೆ ಬಂದು ಬಿಡುತ್ತಾರೆ. ೨ ತಾಸು ಬಿಟ್ಟು ಗದ್ದಿಗೆಯೊಳಗೆ

ಹೋಗಿ ಗಂಧ ಆರಿದ ಮೇಲೆ ಗಲ್ಲೀಪ (ಹೊಸ ಬಟ್ಟೆ) ತೊಡಿಸುತ್ತಾರೆ. ನಂತರ ನಿತ್ಯದಂತೆ ಗದ್ದಿಗೆಯನ್ನು ಪೂಜಿಸಿ ಅಲಂಕರಿಸುತ್ತಾರೆ. ಕೊನೆಗೆ ಮಂಗಳಾರತಿ ಮಾಡಿ ಪ್ರಸಾದ (ಹಣ್ಣು–ಕಾಯಿ) ಹಂಚುತ್ತಾರೆ.

ಅಂದುರಾತ್ರಿ ವಹಿವಾಟುದಾರರ ಮನೆಯಿಂದ ಉತ್ಸವದ ಸಾಮಾನುಗಳಾದ ಕಳಸ, ಬೆಳ್ಳಿಪಾದುಕೆ, ಚೌರಿ, ಪಲ್ಲಕ್ಕಿಯ ಅಲಂಕಾರದ ಸಾಮಾನುಗಳಾದ ಎರಡು ಬೆಳ್ಳಿಯ ಸಿಂಹದ ಮುಖ (ಇವುಗಳನ್ನು ಪಲ್ಲಕ್ಕಿಯ ಹಿಂದೊಂದು ಮುಂದೊಂದುಹಾಕುತ್ತಾರೆ.) ಹೊಸಬಟ್ಟೆ–ಇವುಗಳನ್ನು ಊದಿಸುತ್ತ ಬಾರಿಸುತ್ತ ಗದ್ದಿಗೆಗೆ ತರುತ್ತಾರೆ. ಇವರ ಮನೆ ಕನಕದಾಸರ ಗುಡಿಯ ಹತ್ತಿರವೇ ಇದೆ. ಗದ್ದುಗೆ ಊರ ಹೊರಗೆ ಇದೆ. ಹಾಗೆ ತಂದ ಸಾಮಾನುಗಳನ್ನು ಒಯ್ದು ಪಲ್ಲಕ್ಕಿಯನ್ನು ಅಲಂಕರಿಸುತ್ತಾರೆ. ಪಲ್ಲಕ್ಕಿಯನ್ನು ಗುಡಿಯ ಕಟ್ಟೆಯ ಮೇಲೆ ಇಟ್ಟು ರಾತ್ರಿ ಇಡೀ ಭಜನೆ ಮಾಡುತ್ತಾರೆ. ಮರುದಿನ ಮುಂಜಾನೆ ಪಲ್ಲಕ್ಕಿಯನ್ನು ಗುಡಿಯ ಸುತ್ತ ಎರಡು ಸಲ ಸುತ್ತಿಸಿ, ಊರಲ್ಲೆಲ್ಲ ಮೆರವಣಿಗೆ ಬರುತ್ತಾರೆ. ಮತ್ತೆ ಅದೇ ಸ್ಥಳಕ್ಕೆ ಹಿಂದಿರುಗಿ ಹೋಗಿ ಗುಡಿಯ ಸುತ್ತ ಒಂದು ಪ್ರದಕ್ಷಿಣೆ ಹಾಕಿ ಗುಡಿಯನ್ನು ಪ್ರವೇಶಿಸುತ್ತಾರೆ. ಪಲ್ಲಕ್ಕಿಯ ಮೇಲೆ ತುಂಬ ಹೊದಿಸಿ ಮೇಲೆ ಮಾಲೆಯನ್ನು ಹಾಕಿ ಸಿಂಗರಿಸಿರುತ್ತಾರೆ.

ಪಲ್ಲಕ್ಕಿಯ ಮೆರವಣಿಗೆಯಾಗುವಾಗ ಅದರ ಹಿಂದೆ ಕೊಡೆಕಲ್‌ದಿಂದ ಬಂದವರು ಒಂದು ಪುಸ್ತಕ ಹಿಡಿದು ಓದುತ್ತಾರೆ. ಬಯಲು, ಶೂನ್ಯ ವಿಷಯ ಕುರಿತ ವಚನಗಳು ಇದ್ದಂತೆ ಕೇಳಿಸುತ್ತದೆ. ಅವು ಸಂಗಮನಾಥನೆ ಬರೆದ ವಚನಗಳಾಗಿರಬಹುದು. ಆ ವಚನಗಳ ಕೊನೆಗೆ "ಬಸವ ಕೇಳೆಂದ...." ಎಂಬ ವಾಕ್ಯ ಬರುತ್ತದೆ. ಇದು ಅಲ್ಲಮನು ಬಸವನಿಗೆ ಶೂನ್ಯತತ್ವವನ್ನು ಬೋಧಿಸಿದಂತೆ ಕಾಣುತ್ತದೆ.

ಕಾಗಿನೆಲೆಯ ಜಾತ್ರೆ ಮುಗಿಸಿದ ಭಕ್ತರು ಬಳ್ಳೀಗಾವಿ, ಸಮೀಪದ ಪ್ರಭುಲಿಂಗೇಶ್ವರ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ ತ್ರಿಪುರಾಂತಕ ಕೆರೆಯ ಹತ್ತಿರ ಮೂರು ಗುಡಿಗಳಿವೆ. ಅದಾದಮೇಲೆ ಅನಿಮಿಷಯ್ಯನ ದೇವಸ್ಥಾನ, ಅಕ್ಕನ ಜನ್ಮಸ್ಥಳವಾದ ಉಡುತಡಿಗೆ ಹೋಗುತ್ತಾರೆ.

**ಹರಕೆ** : ಕೊಡೆಕಲ್‌ದಿಂದ ರಾಜ ಪುರೋಹಿತರು ಬಂದು ಗೌಡರ ಮನೆತನದವರಿಗೆ ಧೋತರ ಶೀರಿ ಕೊಡುತ್ತಿದ್ದ ಸಂಪ್ರದಾಯವಿತ್ತು. (೩೦ ವರ್ಷದ ಹಿಂದಿನವರೆಗೆ ಈ ಪದ್ಧತಿ ನಡೆದಿತ್ತು). ರಾಜ ಪುರೋಹಿತರ ಪ್ರಕಾರ ಇಲ್ಲಿಯ ಸಂಗಮನಾಥನೇ ಬಸವಣ್ಣ. ಈ ಬಸವಣ್ಣನು ರಾಜನ ಅಧಿಕಾರಿಯಿದ್ದ ಕಾರಣ ಛತ್ರ, ಚಾಮರ, ಕುದುರೆ ಕಾಣಿಕೆ ಕೊಡುವ ಪದ್ಧತಿ ಬಂದಿದೆಯೆನ್ನುತ್ತಾರೆ.

ಜನರು ಈಗಲೂ ಸಂಗಮನಾಥರಿಗೆ ಬೇಡಿಕೊಳ್ಳುತ್ತಾರೆ. ಅವನ ಹೆಸರಿಡುತ್ತಾರೆ. ಕೊಡೆಕಲ್, ಸಿಗ್ಲಿ, ಯಲವಗಿಯ ಜನರು, ಹೆಚ್ಚಾಗಿ ಕುರುಬರು ಸಂಗಮನಾಥರ ಹೆಸರಿಗೆ ಹರಕೆ ಹೊತ್ತರೆ, ಮುಟ್ಟಿಸಲು ಅವರು ಕಾಗಿನೆಲೆಗೆ ಬಂದೇ ತೀರಬೇಕೆಂದು ಗಟ್ಟಿಯಾಗಿ ನಂಬಿದ್ದಾರೆ.

ಕಾಗಿನೆಲೆಯ ಊರ ಹೊರಗೆ ಜೋಡ ಬಸವಣ್ಣನ ಗುಡಿಯೆದುರು ಒಂದು ಸಮಾಧಿ, ಅದರ ಮೇಲೆ ಲಿಂಗ, ಲಿಂಗದೆದುರು ಬಸವಣ್ಣನ ಗುಡಿ ಇವು ನಿಶ್ಶಬ್ದವಾಗಿ ನಿಂತಿವೆ. ದೂರದಲ್ಲಿ ಹಾಳು ಬಿದ್ದ ದೇವಾಲಯದ ಅಳಿದುಳಿದ ಅವಶೇಷಗಳು ಹರಡಿ ಬಿದ್ದಿವೆ.

ನಾಲ್ಕಾರು ವರ್ಷದ ಹಿಂದೆ ಕೆರೆ ಬತ್ತಿದಾಗ ಕೋಡಿಯ ದಬಾಸ ಕಲ್ಲಿನ ಮೇಲೆ ಶಾಸನಗಳಿವೆ ನೋಡಿರೆಂದು ಜನ ಹೇಳಿದ್ದರು. ಆ ಶಾಸನಗಳನ್ನು ಓದಿದ ಮೇಲೆ ಈ ವಿಷಯದ ಮೇಲೆ ಹೆಚ್ಚಿನ ಬೆಳಕು ಬೀಳಬಹುದು. ○